# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 437
2. ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 16.12.2021
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಎತ್ತಿನಹೊಳೆ ಯೋಜನೆಯು ಯಾವ ಹಂತದಲ್ಲಿದೆ; ಈ ಯೋಜನೆಯಿಂದ ಯಾವ ಪ್ರದೇಶಗಳಿಗೆ ನೀರಾವರಿ ಅನುಕೂಲವಾಗುತ್ತದೆ | ಎತ್ತಿನಹೊಳೆ ಯೋಜನೆಯು ಕುಡಿಯುವ ನೀರಿನ ಯೋಜನೆಯಾಗಿದ್ದು, ಈ ಯೋಜನೆಯಿಂದ ಯಾವುದೇ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸಲು ಯೋಜಿಸಿರುವುದಿಲ್ಲ.<br><br>ಎತ್ತಿನಹೊಳೆ ಕುಡಿಯುವ ನೀರಿನ ಯೋಜನೆಯ ಪ್ರಸ್ತುತ ಹಂತದ ವಿವರಗಳನ್ನು **ಅನುಬಂಧ** ದಲ್ಲಿ ಒದಗಿಸಲಾಗಿದೆ. |
| ಆ) | ಈ ಯೋಜನೆ ಪೂರ್ಣಗೊಳ್ಳಲು ಸಮಯಾವಕಾಶ ಎಷ್ಟು? (ಸಂಪೂರ್ಣ ವಿವರ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮೊದಲನೇ ಹಂತದ ಏತ ಕಾಮಗಾರಿಗಳು, ವಿದ್ಯುತ್ ಪೂರೈಕೆ ಕಾಮಗಾರಿಗಳು ಮತ್ತು ಎರಡನೇ ಹಂತದ ಗುರುತ್ವ ಕಾಲುವೆಯ ಪ್ರಾರಂಭಿಕ 55.00 ಕಿ.ಮೀ ವರೆಗಿನ ಕಾಲುವೆ ಕಾಮಗಾರಿಗಳನ್ನು ಪೂರ್ಣಗೊಳಿಸಿ ಮುಂದಿನ ಮುಂಗಾರು ಹಂಗಾಮಿನಲ್ಲಿ ಪ್ರಾಯೋಗಿಕವಾಗಿ ನೀರು ಹರಿಸಲು ಯೋಜಿಸಲಾಗಿದೆ. ಸದರಿ ಯೋಜನೆಯ ಕಾಮಗಾರಿಗಳಿಗಾಗಿ ಭೂಸ್ವಾಧೀನ ಪ್ರಕ್ರಿಯೆ ಮತ್ತು ಅರಣ್ಯ ತೀರುವಳಿಗೆ ಸಂಬಂಧಿಸಿದ ಹಾಗೂ ಇನ್ನಿತರೆ ಇಲಾಖೆಗಳಿಂದ ಅವಶ್ಯಕ ಅನುಮೋದನೆ ಪಡೆದು ಹಾಗೂ ಕಾನೂನು ತೊಡಕುಗಳನ್ನು ನಿವಾರಿಸಿಕೊಂಡು ಮತ್ತು ಬಾಕಿ ಕಾಮಗಾರಿಗಳಿಗೆ ಅಗತ್ಯವಿರುವ ಆರ್ಥಿಕ ಸಂಪನ್ಮೂಲಗಳನ್ನು ಆದ್ಯತೆ ಅನುಸಾರ ಒದಗಿಸಿಕೊಂಡು 2023-24ರ ಅಂತ್ಯದೊಳಗೆ ಪ್ರಸ್ತುತ ಪ್ರಗತಿಯಲ್ಲಿರುವ ಯೋಜನೆಯಡಿಯಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಪೂರ್ಣಗೊಳಿಸಲು ಯೋಜಿಸಲಾಗಿದೆ.<br>• ಮೊದಲನೆ ಹಂತದ ಏತ ಮತ್ತು ವಿದ್ಯುತ್ ಕಾಮಗಾರಿಗಳು.<br>• ಎರಡನೆ ಹಂತದ ಗುರುತ್ವ ಕಾಲುವೆ ಕಾಮಗಾರಿಗಳು.<br>• ಭೈರಗೊಂಡ್ಲು ಜಲಾಶಯಕ್ಕಿಂತ ಮುಂಚೆ ಕವಲೊಡೆಯುವ ವಿವಿಧ ಫೀಡರ್ ಕಾಲುವೆ ಕಾಮಗಾರಿಗಳು.<br><br>ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿ, ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರೊದಗಿಸುವ ಭೈರಗೊಂಡ್ಲು ನಂತರದ ಲಿಫ್ಟ್ ಕಾಮಗಾರಿ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಫೀಡರ್ ಕಾಲುವೆ ಕಾಮಗಾರಿಗಳನ್ನು ಭೈರಗೊಂಡ್ಲು ಜಲಾಶಯಕ್ಕೆ ಸಂಬಂಧಿಸಿದ ಭೂಸ್ವಾಧೀನ ಪ್ರಕ್ರಿಯೆಯು ಪೂರ್ಣಗೊಂಡ ನಂತರ ಕೈಗೊಳ್ಳಲು ಯೋಜಿಸಲಾಗಿದೆ. |

**ಸಂಖ್ಯೆ: ಜಸಂಇ 117 ಡಬ್ಲ್ಯೂಎಲ್ಎ 2021**

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

## ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 437ಕ್ಕೆ ಅನುಬಂಧ

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು ಎರಡು ಹಂತಗಳಲ್ಲಿ ಕೈಗೆತ್ತಿಕೊಳ್ಳಲಾಗಿರುತ್ತದೆ.

**ಅ) <u>ಮೊದಲನೇ ಹಂತ:</u> ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಲಿಫ್ಟ್ ಕಾಮಗಾರಿಗಳು**

- ✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮೊದಲನೇ ಹಂತದ ಏತ ಕಾಮಗಾರಿಗಳು ಹಾಗೂ ವಿದ್ಯುತ್ ಪೂರೈಕೆ ಕಾಮಗಾರಿಗಳು ಬಹುತೇಕ ಪೂರ್ಣಗೊಳ್ಳುವ ಹಂತದಲ್ಲಿರುತ್ತವೆ.
- ✓ 8 ವಿಯರ್‌ಗಳ ಪೈಕಿ, 7 ವಿಯರ್‌ಗಳ ಕಾಮಗಾರಿಗಳು ಪೂರ್ಣಗೊಂಡಿದ್ದು, ಇನ್ನೊಂದು ವಿಯರ್ ಕಾಮಗಾರಿಯು ಪ್ರಗತಿಯಲ್ಲಿದೆ.
- ✓ 9 ಪಂಪ್‌ಹೌಸ್‌ಗಳ ಪೈಕಿ 08 ಪಂಪ್ ಹೌಸ್ ಕಾಮಗಾರಿಗಳು ಪೂರ್ಣಗೊಂಡಿದ್ದು, 01 ಪಂಪ್‌ಹೌಸ್ ಪ್ರಗತಿಯಲ್ಲಿರುತ್ತದೆ.
- ✓ 4 ವಿತರಣಾ ತೊಟ್ಟಿಗಳ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.
- ✓ ಒಟ್ಟು 126.31 ಕಿ.ಮೀ ಉದ್ದದ ಏರು ಕೊಳವೆಯ ಪೈಕಿ, ಇದುವರೆಗೆ 116.00 ಕಿ.ಮೀ ಏರು ಕೊಳವೆ ಕಾಮಗಾರಿಯು ಪೂರ್ಣಗೊಂಡಿರುತ್ತದೆ.

**ಆ) <u>ಎರಡನೇ ಹಂತ:</u> ಎತ್ತಿನಹೊಳೆ ಮುಖ್ಯ ಗುರುತ್ವ ಕಾಲುವೆ ಹಾಗೂ ಫೀಡರ್ ಕಾಲುವೆಗಳ ನಿರ್ಮಾಣ**

- ✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಎರಡನೇ ಹಂತದಲ್ಲಿ ಸಕಲೇಶಪುರ ತಾಲ್ಲೂಕಿನ ಹರವನಹಳ್ಳಿ ಹತ್ತಿರ ವಿತರಣಾ ತೊಟ್ಟಿಯಿಂದ 260.00 ಕಿ.ಮೀ ಉದ್ದದ ಗುರುತ್ವ ಕಾಲುವೆಯನ್ನು (ಮಾರ್ಗದ ಮಧ್ಯದಲ್ಲಿ ಸುಮಾರು 10.47 ಕಿ.ಮೀ ಉದ್ದದ ಬೃಹತ್ ಮೇಲ್ಗಾಲುವೆ ಒಳಗೊಂಡಂತೆ) ನಿರ್ಮಿಸುವುದು ಹಾಗೂ ಸಂಬಂಧಪಟ್ಟ ಫೀಡರ್ ಕಾಲುವೆಗಳನ್ನು ನಿರ್ಮಿಸುವುದು, ಭೈರಗೊಂಡ್ಲು ಜಲಾಶಯ ನಿರ್ಮಾಣ, ಭೈರಗೊಂಡ್ಲು ಜಲಾಶಯದಿಂದ ನೀರನ್ನು ಎತ್ತುವ ಲಿಫ್ಟ್ ಕಾಮಗಾರಿ, ಕೋಲಾರ ಮತ್ತು ಶ್ರೀನಿವಾಸಪುರ ಫೀಡರ್ ನಿರ್ಮಾಣ ಕಾಮಗಾರಿಗಳನ್ನು ಒಳಗೊಂಡಿರುತ್ತದೆ.

- ✓ ಎರಡನೇ ಹಂತದ ಗುರುತ್ವ ಕಾಲುವೆಯ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತವೆ. ಇಲ್ಲಿಯವರೆಗೆ ಸುಮಾರು 89 ಕಿ.ಮೀ ಉದ್ದದ ಮುಖ್ಯ ಕಾಲುವೆಯ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.

- ✓ ಟಿ.ಜಿ.ಹಳ್ಳಿ ಮತ್ತು ರಾಮನಗರ ಫೀಡರ್ ಕಾಲುವೆಯಿಂದ ಕೊರಟಗೆರೆ, ನೆಲಮಂಗಲ, ಮಾಗಡಿ, ರಾಮನಗರ, ಕನಕಪುರ ಹಾಗೂ ಚನ್ನಪಟ್ಟಣ ತಾಲ್ಲೂಕುಗಳಿಗೆ ಕುಡಿಯುವ ನೀರನ್ನು ಒದಗಿಸುವುದು ಹಾಗೂ ನೆಲಮಂಗಲ ತಾಲ್ಲೂಕಿನ 2 ಕೆರೆಗಳಿಗೆ ಅದರ ಸಾಮರ್ಥ್ಯದ ಶೇ.50ರಷ್ಟು ನೀರನ್ನು ತುಂಬಿಸಲು ಯೋಜಿಸಲಾಗಿರುತ್ತದೆ. ಸದರಿ ಫೀಡರ್ ಕಾಲುವೆಯು ಒಟ್ಟು 52.89 ಕಿ.ಮೀ ಉದ್ದವಿದ್ದು, ಈವರೆಗೂ 36.00 ಕಿ.ಮೀ ಪೈಪ್‌ಲೈನ್ ಕಾಮಗಾರಿ ಪೂರ್ಣಗೊಂಡಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

- ✓ ಮಧುಗಿರಿ ಫೀಡರ್ ಕಾಲುವೆಯಿಂದ ತುಮಕೂರು, ಕೊರಟಗೆರೆ, ಮಧುಗಿರಿ ಹಾಗೂ ಪಾವಗಡ ತಾಲ್ಲೂಕುಗಳಿಗೆ ಕುಡಿಯುವ ನೀರನ್ನು ಒದಗಿಸುವುದು ಹಾಗೂ ಈ ಭಾಗದ 79 ಕೆರೆಗಳಿಗೆ ಅದರ ಸಾಮರ್ಥ್ಯದ ಶೇ.50ರಷ್ಟು ನೀರನ್ನು ತುಂಬಿಸಲು ಯೋಜಿಸಲಾಗಿರುತ್ತದೆ. ಸದರಿ ಫೀಡರ್ ಕಾಲುವೆಯ ಒಟ್ಟು ಉದ್ದ 120.48 ಕಿ.ಮೀ ಇದ್ದು, ಇದರಲ್ಲಿ 78.00 ಕಿ.ಮೀ ಪೈಪ್ ಲೈನ್ ಕಾಮಗಾರಿಯು ಪೂರ್ಣಗೊಂಡಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

- ✓ ಗೌರಿಬಿದನೂರು ಫೀಡರ್ ಕಾಲುವೆಯಿಂದ ಮಧುಗಿರಿ, ಕೊರಟಗೆರೆ, ದೊಡ್ಡಬಳ್ಳಾಪುರ ಹಾಗೂ ಗೌರಿಬಿದನೂರು ತಾಲ್ಲೂಕುಗಳಿಗೆ ಕುಡಿಯುವ ನೀರನ್ನು ಒದಗಿಸುವುದು ಹಾಗೂ 107 ಕೆರೆಗಳಿಗೆ ಅದರ ಸಾಮರ್ಥ್ಯದ ಶೇ.50ರಷ್ಟು ನೀರನ್ನು ತುಂಬಿಸಲು ಯೋಜಿಸಲಾಗಿರುತ್ತದೆ. ಸದರಿ ಫೀಡರ್ ಕಾಲುವೆಯು ಒಟ್ಟು 81.60 ಕಿ.ಮೀ ಉದ್ದವಿದ್ದು, ಈವರೆಗೂ 63.00 ಕಿ.ಮೀ ಪೈಪ್‌ಲೈನ್ ಕಾಮಗಾರಿಯು ಪೂರ್ಣಗೊಂಡಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

- ✓ ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಗುತ್ತಿಗೆದಾರರಿಗೆ ವಹಿಸಲಾಗಿದ್ದು, ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಗೊಳ್ಳುವ ಸಂದರ್ಭದಲ್ಲಿ ಕೊರಟಗೆರೆ ತಾಲ್ಲೂಕಿನ ರೈತರು ದೊಡ್ಡಬಳ್ಳಾಪುರ ತಾಲ್ಲೂಕಿನ ರೈತರಿಗೆ ನೀಡುವ ಪರಿಹಾರ ದರದಂತೆ ಅವರಿಗೂ ಸಹ ಏಕರೂಪದರ ನೀಡಲು ಒತ್ತಾಯಿಸಿದ್ದರಿಂದ ಕಾಮಗಾರಿಗಳಿಗೆ ಅಡೆತಡೆ ಉಂಟಾಗಿರುತ್ತದೆ. ಈ ಕಾರಣದಿಂದಾಗಿ ಭೂಮಿಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ಪ್ರಾರಂಭಿಸುವಲ್ಲಿ ವಿಳಂಬವಾಗಿರುತ್ತದೆ.

- ✓ ಭೈರಗೊಂಡ್ಲು ಜಲಾಶಯ ನಂತರದ ಲಿಫ್ಟ್ ಮತ್ತು ಫೀಡರ್ ಕಾಲುವೆ ಕಾಮಗಾರಿಗಳ ಮುಖಾಂತರ ಬೆಂಗಳೂರು ಗ್ರಾಮಾಂತರ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಕುಡಿಯುವ ನೀರು ಪೂರೈಸಲು ಮತ್ತು ಕೆರೆ ತುಂಬಿಸಲು ಅನುಮೋದಿತ ಯೋಜನಾ ವರದಿಯಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಿಂದ ಮಾತ್ರ ಈ ಪ್ರದೇಶಗಳಿಗೆ ಸುರಕ್ಷಿತ ಕುಡಿಯುವ ನೀರನ್ನು ಪೂರೈಸಲು ಸಾಧ್ಯವಿದ್ದು, ಈ ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಳ್ಳಲು ಸದರಿ ಜಿಲ್ಲೆಗಳ ಜನ ಪ್ರತಿನಿಧಿಗಳು ತೀವ್ರವಾಗಿ ಒತ್ತಾಯಿಸುತ್ತಿರುವುದರಿಂದ ಪರ್ಯಾಯ ಪ್ರಸ್ತಾವನೆಯನ್ನು ಒಳಗೊಂಡ ರೂ.23,251.66 ಕೋಟಿ ಮೊತ್ತದ ಪುನರ್ ಪರಿಷ್ಕೃತ ಯೋಜನಾ ವರದಿಯನ್ನು ನಿಗಮದ ನಿರ್ದೇಶಕರ ಮಂಡಳಿಯ ಅನುಮೋದನೆಯ ಮೇರೆಗೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿತ್ತು. ಸದರಿ ಪ್ರಸ್ತಾವನೆಯ ಕುರಿತು ಆರ್ಥಿಕ ಇಲಾಖೆಯು ಕೆಲವು ಸ್ಪಷ್ಟೀಕರಣವನ್ನು ಕೋರಿದ್ದು, ಪರಿಶೀಲಿಸಿ ವರದಿಯನ್ನು ಸಲ್ಲಿಸುವಂತೆ ವ್ಯ.ನಿ., ವಿ.ಜ.ನಿ.ನಿ ರವರನ್ನು ಕೋರಲಾಗಿದೆ.

- ✓ ಜಲಾಶಯ ನಿರ್ಮಾಣದ ಪರ್ಯಾಯ ಪ್ರಸ್ತಾವನೆಯ ಅನುಸಾರ ಭೈರಗೊಂಡ್ಲು ಜಲಾಶಯದ ನಂತರದ ಲಿಫ್ಟ್ ಕಾಂಪೋನೆಂಟ್ ಕಾಮಗಾರಿಗಳಿಗೆ ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ.

- ✓ ಭೈರಗೊಂಡ್ಲು ಜಲಾಶಯದಿಂದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರೊದಗಿಸುವ ಕೋಲಾರ ಮತ್ತು ಶ್ರೀನಿವಾಸಪುರ ಫೀಡರ್ ಕಾಲುವೆ ಕಾಮಗಾರಿಗಳ ಅಂದಾಜು ಪಟ್ಟಿಗಳು ತಯಾರಿಕಾ ಹಂತದಲ್ಲಿವೆ.

*****